# ಶಾಲಾ ಸಂಸ್ಕೃತಿಯ ಮಹತ್ವ

***ಅನುರಾಗ್ ಬೆಹರ್***

ಒಂದು ಶಾಲೆಯ ಪಠ್ಯಕ್ರಮವು ವಿದ್ಯಾರ್ಥಿಗಳ ಕಲಿಕೆಯನ್ನು ರೂಪಿಸುವ ಎಲ್ಲ ಅಂಶಗಳನ್ನು ಒಳಗೊಂಡಿರುತ್ತದೆ. ಕಲಿಕಾ ಗುರಿಗಳು, ಪಠ್ಯವಿಷಯ, ಪಠ್ಯಪುಸ್ತಕಗಳು, ಬೋಧನಾವಿಧಾನ ಮತ್ತು ಮೌಲ್ಯಮಾಪನ ಮಾತ್ರವಲ್ಲದೆ ಶಾಲೆಯ ಸಂಸ್ಕೃತಿ ಮತ್ತು ಪ್ರಕ್ರಿಯೆಗಳು ಸಹ ಪ್ರಮುಖವೆನಿಸುತ್ತವೆ. ಪಠ್ಯಕ್ರಮದ ಸಂಕುಚಿತ ದೃಷ್ಟಿಕೋನಗಳು ಅದರ ವಿನ್ಯಾಸ ಮತ್ತು ಅಭ್ಯಾಸವನ್ನು ನಿರ್ಧರಿಸುತ್ತವೆ. ಆದರೆ ಶಿಕ್ಷಣದಲ್ಲಿ ಶಾಲಾ ಸಂಸ್ಕೃತಿ ಮತ್ತು ಪ್ರಕ್ರಿಯೆಗಳು ವಹಿಸುವ ಪ್ರಮುಖ ಪಾತ್ರವನ್ನು ನಿರ್ಲಕ್ಷಿಸುತ್ತವೆ ಅಥವಾ ಈ ಕುರಿತು ಬೂಟಾಟಿಕೆಯನ್ನಷ್ಟೇ ತೋರುತ್ತವೆ.

ಶಾಲಾ ಶಿಕ್ಷಣಕ್ಕಾಗಿ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2023 (ಎನ್.ಸಿ.ಎಫ್), ಸಂಸ್ಕೃತಿ ಮತ್ತು ಪ್ರಕ್ರಿಯೆಗಳನ್ನು ಕೇವಲ ಒಳ್ಳೆಯ ಉದ್ದೇಶದ ಹೇಳಿಕೆಗಳಿಗಷ್ಟೇ ಸೀಮಿತಗೊಳಿಸದೆ ಅವುಗಳಿಗೆ ಸಲ್ಲಬೇಕಾದ ಪ್ರಾಮುಖ್ಯವನ್ನು ನೀಡುತ್ತದೆ. ಇದು ಉದ್ದೇಶ ಮತ್ತು ತತ್ವದ ಹೇಳಿಕೆಗಳನ್ನು ವರ್ತನೆ ಮತ್ತು ಅಭ್ಯಾಸಗಳಾಗಿ ಪರಿವರ್ತಿಸುತ್ತದೆ. ವಿದ್ಯಾರ್ಥಿಗಳು ಸಂಸ್ಕೃತಿಯನ್ನು ಅನುಭವಿಸುವ ರೀತಿ ಹೀಗೆಯೇ. ಉದಾಹರಣೆಗೆ, ಎಲ್ಲರನ್ನೂ ಗೌರವಿಸುವುದು, ಬಹುತ್ವ, ಸಹಾನುಭೂತಿ ಮತ್ತು ಒಳಗೊಳ್ಳುವಿಕೆ ಇತ್ಯಾದಿ ಮೌಲ್ಯಗಳನ್ನು ಅಭಿವೃದ್ಧಿಪಡಿಸುವುದು ಅಗತ್ಯವೆಂದು ಹೇಳುವ ಬದಲು, ದೈನಂದಿನ ಶಾಲಾ ಬದುಕಿನಲ್ಲಿ ಈ ಹೇಳಿಕೆಯು ಅಭಿವ್ಯಕ್ತಿಯಾಗುವುದು ಹೇಗೆಂದು ಇದು ಗಮನ ಹರಿಸುತ್ತದೆ. ಪ್ರಾಂಶುಪಾಲರು ಅಥವಾ ಶಿಕ್ಷಕರನ್ನು ಪೋಷಕರು ಭೇಟಿಯಾದಾಗ ಅವರನ್ನು ನಡೆಸಿಕೊಳ್ಳುವುದು, ಶೈಕ್ಷಣಿಕವಾಗಿ ಹೆಣಗಾಡುತ್ತಿರುವ ವಿದ್ಯಾರ್ಥಿಗಳ ಜೊತೆಗೆ ಶಿಕ್ಷಕರ ವರ್ತನೆ, ವಿದ್ಯಾರ್ಥಿಗಳು ಇತರರಿಗೆ ನೆರವು ಒದಗಿಸಿದಾಗ ಈ ಸದ್ಗುಣವನ್ನು ಗುರುತಿಸುವುದು ಹಾಗೂ ಇನ್ನೂ ಅನೇಕ ವಿಷಯಗಳನ್ನು ಇದು ಒಳಗೊಂಡಿದೆ.

ಪ್ರೇರೇಪಿತ ಮತ್ತು ತೊಡಗಿಸಿಕೊಂಡಿರುವ ವಿದ್ಯಾರ್ಥಿಗಳೊಂದಿಗೆ ಪರಿಣಾಮಕಾರಿ ಕಲಿಕಾ ಪರಿಸರವನ್ನು ರೂಪಿಸುವುದು ಮತ್ತು ಮೌಲ್ಯಗಳನ್ನು ಬೆಳೆಸುವುದು - ಹೀಗೆ ಶಾಲಾ ಸಂಸ್ಕೃತಿಯು ವಿದ್ಯಾರ್ಥಿಗಳ ಕಲಿಕೆಯಲ್ಲಿ ಎರಡು ರೀತಿಯ ಪಾತ್ರಗಳನ್ನು ವಹಿಸುತ್ತದೆ. ನನ್ನ ಹಿಂದಿನ ಅಂಕಣವು, ಶಾಲಾ ಸಂಸ್ಕೃತಿಯ ಪಾತ್ರ ಸೇರಿದಂತೆ, ಮೌಲ್ಯಗಳನ್ನು ಅಭಿವೃದ್ಧಿಪಡಿಸುವಲ್ಲಿ ಎನ್.ಸಿ.ಎಫ್ ವಹಿಸಲಿರುವ ಪಾತ್ರದ ಮೇಲೆ ಬೆಳಕು ಚೆಲ್ಲಿತ್ತು.

ನಿರ್ಬಂಧ, ನಿಯಮಾನುಸರಣೆ ಮತ್ತು ನಿಯಂತ್ರಣ, ಅಥವಾ ವ್ಯಕ್ತಿಗಳಲ್ಲಿ ನಂಬಿಕೆ ಮತ್ತು ಸ್ವಯಂ ಶಿಸ್ತನ್ನು ಬೆಳೆಸುವುದು, ಇನ್ನಷ್ಟು ಕಠಿಣ ಶ್ರಮ ಪಟ್ಟು ತಮ್ಮ ಜವಾಬ್ದಾರಿಯನ್ನು ನಿರ್ವಹಿಸಲು ಉತ್ತೇಜಿಸುವುದು - ಹೀಗೆ

ಸಂಸ್ಕೃತಿಯು ಕಲಿಕೆಯ ವಿಭಿನ್ನ ಪರಿಸರಗಳನ್ನು ಪೋಷಿಸಬಹುದು. ಮೊದಲನೆಯದನ್ನು ಮಾಡುವುದು ತುಂಬಾ ಸುಲಭ. ಆದರೆ ಎರಡನೆಯದನ್ನು ಸಾಧಿಸಬೇಕಾದರೆ ಶಿಕ್ಷಕರು ಮತ್ತು ಇಡೀ ಶಾಲೆಯ ಸಂಘಟಿತ ಯತ್ನ ಬೇಕಾಗಿದೆ. ಸಂರಚನಾಕ್ರಮ ಮತ್ತು ಮಾರ್ಗದರ್ಶನದ ಕೊರತೆಯು ಕಲಿಕೆಯ ವಿಚಾರದಲ್ಲಿ ಭೀತಿ ಮತ್ತು ಅಪನಂಬಿಕೆಯಷ್ಟೇ ಸಮಸ್ಯೆಯನ್ನುಂಟು ಮಾಡಬಲ್ಲದು. ವಿದ್ಯಾರ್ಥಿಗಳ ಪಾಲಿಗೆ ಸೂಕ್ತ ಮಾರ್ಗದರ್ಶನ ನೀಡುವುದರ ಜೊತೆಗೆ ಸ್ಪಷ್ಟತೆಯನ್ನು ಹೊಂದಿದ ಭಯರಹಿತ, ಪ್ರೋತ್ಸಾಹದಾಯಕ ಮತ್ತು ಉತ್ತೇಜನಕಾರಿ ಪರಿಸರವು ಹೆಚ್ಚು ಪರಿಣಾಮಕಾರಿಯಾಗುತ್ತದೆ.

ಶಾಲೆಗಳು ಹೇಗೆ ಸೂಕ್ತ ಕಲಿಕಾ ಪರಿಸರವನ್ನು ರೂಪಿಸುತ್ತವೆ ಮತ್ತು ಮೌಲ್ಯಗಳನ್ನು ಅಭಿವೃದ್ಧಿಪಡಿಸುತ್ತವೆ ಎಂಬುದನ್ನು ಅರಿತುಕೊಳ್ಳುವ ಮೊದಲು ಶಾಲಾ ಸಂಸ್ಕೃತಿ ಎಂದರೇನು ಎಂಬುದನ್ನು ತಿಳಿದುಕೊಳ್ಳೋಣ. ಇದು ಎರಡು ಅಂತರ-ಸಂಬಂಧಿ ಅಂಶಗಳನ್ನು ಹೊಂದಿದೆ. ಮೊದಲನೆಯದು ಮೌಲ್ಯಗಳು, ರೂಢಿಗಳು ಮತ್ತು ನಂಬಿಕೆಗಳು. ಎರಡನೆಯದು ವರ್ತನೆಗಳು, ಸಂಬಂಧಗಳು ಮತ್ತು ಅಭ್ಯಾಸಗಳು. ಯಾವುದೇ ಶಾಲೆಯು ಈ ಅನುಭವಗಳನ್ನು ರೂಪಿಸಿಕೊಳ್ಳಬೇಕಾದರೆ, ಸಂಸ್ಕೃತಿಯ ಮೂರು ವಿಧದ ಲಕ್ಷಣಗಳು ಹೊರಹೊಮ್ಮುವುದಕ್ಕೆ ಮಹತ್ವ ನೀಡಬೇಕಾಗುತ್ತದೆ.

ಮೊದಲನೆಯದಾಗಿ, *ಶಾಲೆ ಮತ್ತು ಅದರೊಂದಿಗೆ ಭಾಗಿಯಾಗುವ ಜನರ ನಡುವಿನ ಸಂಬಂಧ:* ಅಂದರೆ, ವಿದ್ಯಾರ್ಥಿಗಳು, ಶಿಕ್ಷಕರು, ಪ್ರಾಂಶುಪಾಲರು, ಸಹಾಯಕ ಸಿಬ್ಬಂದಿ, ಪೋಷಕರು ಮತ್ತು ಇತರರು. ಉದಾಹರಣೆಗೆ, ಸಹಕಾರಿ ಮತ್ತು ಸಹಯೋಗದೊಂದಿಗೆ ಅಥವಾ ಸ್ಪರ್ಧಾತ್ಮಕವಾಗಿ ಕಾರ್ಯ ನಿರ್ವಹಿಸುವ ಶಿಕ್ಷಕರು, ಸಲಹೆ ಪಡೆದು ಮುನ್ನಡೆಯುವ ಅಥವಾ ಯಾವಾಗಲೂ ನಿರ್ದೇಶನವನ್ನೇ ನೀಡುವ ಪ್ರಾಂಶುಪಾಲರು, ಮತ್ತು ಸಂವಾದದ ಮೂಲಕ ಭಿನ್ನಾಭಿಪ್ರಾಯಗಳನ್ನು ಬಗೆಹರಿಸುವ ವಿದ್ಯಾರ್ಥಿಗಳು. ಶೈಕ್ಷಣಿಕ ಹಿನ್ನೆಲೆಯಲ್ಲಿ ಕಾರ್ಯಾತ್ಮಕ ಸಂಬಂಧಗಳು ಪರಸ್ಪರ ನಂಬಿಕೆ ಮತ್ತು ಗೌರವ, ಮುಕ್ತತೆ, ಸಂವಹನ ಮತ್ತು ಸಹಯೋಗ, ಅಲ್ಲದೆ ತೋರುವ ಕಾಳಜಿ ಮತ್ತು ಜವಾಬ್ದಾರಿಯುತ ವರ್ತನೆಗಳಿಂದ ಗುರುತಿಸಲ್ಪಡುತ್ತವೆ.

ಎರಡನೆಯದಾಗಿ, *ಶಾಲೆಯಲ್ಲಿ ಪ್ರದರ್ಶಿಸಲು ಮತ್ತು ಸಂಭ್ರಮಿಸಲು ಪರಿಗಣಿಸಬೇಕಾದ ಸಂಕೇತಗಳು:* ಅನೇಕ ಶಾಲೆಗಳು ಸ್ಪಷ್ಟವಾಗಿ ಕಾಣುವ ಮತ್ತು ಸೂಚ್ಯವಾಗಿರುವ ಅನೇಕ ಸಂಕೇತಗಳನ್ನು ಹೊಂದಿರುತ್ತವೆ. ಶಾಲೆಗೆ ಮೌಲ್ಯಯುತವೆನಿಸುವ ಅಂಶಗಳಿಗೆ ಪ್ರದರ್ಶನ ಫಲಕಗಳು ಒತ್ತು ನೀಡುತ್ತವೆ. ಉದಾಹರಣೆಗೆ, ಮಂಡಳಿ ಪರೀಕ್ಷೆಗಳಲ್ಲಿ ಉನ್ನತ ಶ್ರೇಯಾಂಕಗಳನ್ನು ಪಡೆದ ವಿದ್ಯಾರ್ಥಿಗಳ ಭಾವಚಿತ್ರಗಳು, ಶಾಲೆಯು ಗೆದ್ದ ಪ್ರಶಸ್ತಿಗಳು ಅಥವಾ ಶಾಲೆಗೆ ಭೇಟಿ ನೀಡಿದ ಸಂದರ್ಶಕರ ಚಿತ್ರಗಳು ಇತ್ಯಾದಿಗಳನ್ನು ಪ್ರದರ್ಶಿಸುವುದು. ಪ್ರದರ್ಶನ ಫಲಕಗಳಲ್ಲಿ ಕಾಣಿಸಿಕೊಳ್ಳುವ ವಿದ್ಯಾರ್ಥಿಗಳ ಕಾರ್ಯವು,

ಯಾವುದಕ್ಕೆ ಒತ್ತು ನೀಡಲಾಗುತ್ತದೆ ಎಂಬುದನ್ನು ನೇರವಾಗಿ ಹೇಳುತ್ತದೆ. ಆಗಾಗ್ಗೆ ಶಾಲೆಯ ಫಲಕಗಳಲ್ಲಿ 'ಹೇಳಿಕೆಗಳು' ಅಥವಾ 'ಉಲ್ಲೇಖ'ಗಳನ್ನು ಬರೆಯಲಾಗುತ್ತದೆ. ಇವು ಸಹ, ಯಾವುದಕ್ಕೆ ಬೆಲೆ ಕೊಡಲಾಗುತ್ತದೆ ಎಂಬುದನ್ನು ನೇರವಾಗಿ ಸೂಚಿಸುತ್ತವೆ. ಪ್ರಾಂಶುಪಾಲರ ಅಥವಾ ಸಿಬ್ಬಂದಿಯ ಕೊಠಡಿ, ತರಗತಿ ಕೋಣೆಗಳು ಅಥವಾ ಶಾಲಾ ಆವರಣದಲ್ಲಿ ಪ್ರಮುಖ ಮತ್ತು ಪ್ರಸಿದ್ಧ ವ್ಯಕ್ತಿಗಳ ಭಾವಚಿತ್ರಗಳು ಅಥವಾ ಮೂರ್ತಿಗಳನ್ನು ಇಡಲಾಗುತ್ತದೆ. ಭೌತಿಕ ವಸ್ತುಗಳ ಆಯ್ಕೆ ಮತ್ತು ಏರ್ಪಾಡು ದೊಡ್ಡ ಮಟ್ಟದ ಸಾಂಕೇತಿಕ ಮೌಲ್ಯವನ್ನು ಹೊಂದಿದೆ. ಉದಾಹರಣೆಗೆ, ಪ್ರಾಂಶುಪಾಲರ ಕುರ್ಚಿಯು ಶಿಕ್ಷಕರ ಕುರ್ಚಿಗಿಂತ ಚೆನ್ನಾಗಿರುತ್ತದೆ. ತರಗತಿ ಕೋಣೆಯಲ್ಲಿ ಪೀಠೋಪಕರಣಗಳ ಏರ್ಪಾಡು, ಬೋಧನೆ-ಕಲಿಕೆಯ ಪ್ರಕ್ರಿಯೆಯ ಕುರಿತು ಶಾಲೆಯು ಹೊಂದಿರುವ ನಂಬಿಕೆಗಳನ್ನು ತಿಳಿಸುತ್ತದೆ. ಶಿಕ್ಷಕರು ಪಾಠ ಮಾಡುವುದನ್ನು ವಿದ್ಯಾರ್ಥಿಗಳು ಹೆಚ್ಚಾಗಿ ಕೇಳಿಸಿಕೊಳ್ಳುವ ಹಾಗೆ ಅಥವಾ ಸಹಯೋಗಿ ಕೆಲಸಕ್ಕಾಗಿ ಸೂಕ್ತ ಸ್ಥಳವನ್ನಾಗಿ ಜೋಡಿಸಲಾಗಿದೆಯೇ? ಶಾಲಾ ಸಭೆ ಅಥವಾ ಇತರ ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ನಡೆಸುವ ಯಾವುದೇ ಸಂಭ್ರಮಾಚರಣೆ ಅಥವಾ ಶ್ಲಾಘನೆಯು ಆಳವಾದ ಸಾಂಕೇತಿಕ ಮೌಲ್ಯವನ್ನು ಒಳಗೊಂಡಿರುತ್ತದೆ. ಈ ಎಲ್ಲ ಸಂಕೇತಗಳನ್ನು ಪಠ್ಯಕ್ರಮದ ಉದ್ದೇಶಗಳೊಂದಿಗೆ ವಿಚಾರಪೂರ್ಣವಾಗಿ ಮತ್ತು ಎಚ್ಚರಿಕೆಯಿಂದ ಹೊಂದಿಸಬೇಕು.

ಮೂರನೆಯದಾಗಿ, *ತರಗತಿ ಕೋಣೆ ಮತ್ತು ಶಾಲಾ ಪ್ರಕ್ರಿಯೆಗಳಿಗೆ ಸಂಬಂಧಿಸಿದ ವ್ಯವಸ್ಥೆ ಮತ್ತು ಅಭ್ಯಾಸಗಳು.* ತರಗತಿ ಕೋಣೆಯ ಪ್ರಮುಖ ಅಭ್ಯಾಸಗಳಲ್ಲಿ ಆಸನ ವ್ಯವಸ್ಥೆಯೂ ಸೇರಿದೆ. ಇದರಲ್ಲಿ ಹುಡುಗ ಹುಡುಗಿಯರಿಬ್ಬರೂ ಒಟ್ಟಿಗೆ ಕುಳಿತುಕೊಳ್ಳುವಂತೆ ಮಾಡುವುದು ಅಥವಾ ಶೈಕ್ಷಣಿಕವಾಗಿ ಚುರುಕಾದ ವಿದ್ಯಾರ್ಥಿಗಳಿಗೆ ಯಾವುದೇ ಆದ್ಯತೆ ನೀಡದಿರುವುದು ಇತ್ಯಾದಿ ಒಳಗೊಂಡಿದೆ. ಇದು ಬೋಧನೆ ಮತ್ತು ಕಲಿಕೆ ಸಾಮಗ್ರಿಗಳ ದೊರೆಯುವಿಕೆ ಮತ್ತು ಸುಲಭ ಲಭ್ಯತೆ, ಇದು ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತಿದೆ ಮತ್ತು ದೊರೆತುದನ್ನು ಸರಿಯಾಗಿ ಹಂಚಲಾಗುತ್ತಿದೆ ಎನ್ನುವುದನ್ನು ಖಾತರಿಪಡಿಸುವುದು ಸಹ ಒಳಗೊಂಡಿದೆ. ಅಲ್ಲದೆ ಕಲಿಕಾ ಪ್ರಕ್ರಿಯೆಯಲ್ಲಿ ವಿದ್ಯಾರ್ಥಿಗಳಿಗೆ ಮಾಲೀಕತ್ವ ಮತ್ತು ಜವಾಬ್ದಾರಿಯನ್ನು ನೀಡುವುದು ಹಾಗೂ ತರಗತಿಯ ಸ್ವಚ್ಛತೆಯ ಜವಾಬ್ದಾರಿಯನ್ನು ಸಹ ಅವರಿಗೆ ನೀಡುವುದು. ಇತರ ಪ್ರಮುಖ ಶಾಲಾ ಪ್ರಕ್ರಿಯೆಗಳೆಂದರೆ, ಶಾಲಾ ಪ್ರಾರ್ಥನಾ ಸಭೆ, ಬಿಸಿಯೂಟದ ಸಮಯದಲ್ಲಿ ವ್ಯವಸ್ಥೆಯ ನಿರ್ವಹಣೆ, ಕ್ರೀಡೆ, ಸಭೆ ಮತ್ತು ಕಾರ್ಯಕ್ರಮಗಳ ನಿರ್ಬಹಣೆಯ ಜವಾಬ್ದಾರಿ ಹಂಚಿಕೆ, ಶಾಲೆಯನ್ನು ಸುಸ್ಥಿತಿಯಲ್ಲಿಡುವುದು, ಕ್ರೀಡೆ ಮತ್ತು ಅವುಗಳ ನಿರ್ವಹಣೆಯಲ್ಲಿನ ಅಭ್ಯಾಸಗಳು, ಮತ್ತು ಪೋಷಕರು ಹಾಗೂ ಸ್ಥಳೀಯ ಸಮುದಾಯದ ಜೊತೆಗೆ ಶಾಲೆಯ ತೊಡಗಿಸಿಕೊಳ್ಳುವಿಕೆ ಇತ್ಯಾದಿ.

ಸಾಂಸ್ಥಿಕ ಸಂಸ್ಕೃತಿಯು ಎಲ್ಲ ರೀತಿಯ ಸಾಧನೆಯ ಮೇಲೆ ಉಂಟು ಮಾಡುವ ಆಳವಾದ ಪರಿಣಾಮವನ್ನು ಕುರಿತು ನಮ್ಮಲ್ಲಿ ಹೆಚ್ಚಿನವರು ವೈಯಕ್ತಿಕ

ಅನುಭವವನ್ನು ಹೊಂದಿದ್ದೇವೆ. ಶಾಲೆಗಳೂ ಇದಕ್ಕಿಂತ ಭಿನ್ನವಾಗಿಲ್ಲ. ಶೈಕ್ಷಣಿಕ ಗುರಿಗಳನ್ನು ಸಾಧಿಸುವಲ್ಲಿ ಶಾಲಾ ಸಂಸ್ಕೃತಿಯು ಹೊಂದಿರುವ ಪಾತ್ರದ ಕುರಿತು, ಪ್ರಾಯೋಗಿಕ ಮತ್ತು ಸಂಬಂಧೀಕರಿಸಬಹುದಾದ ರೀತಿಯಲ್ಲಿ ಎನ್.ಸಿ.ಎಫ್ ಶಿಕ್ಷಕರಿಗೆ ಮನದಟ್ಟು ಮಾಡುತ್ತದೆ.